# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114

6ನೇ ವರ್ಷ 11ನೇ ಸಂಚಿಕೆ ಕೊಪ್ಪ 8-11-1987 ಭಾನುವಾರ ಬೆಲೆ 50 ಪೈಸೆ


## ಕೊಪ್ಪ ಭೂಬ್ಯಾಂಕ್ 9% ಡಿವಿಡೆಂಡ್ ನೀಡಿಕೆ

ಕೊಪ್ಪ : ಇಲ್ಲಿನ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ಸತತ 2ನೇ ವರ್ಷ ಲಾಭದಲ್ಲಿ ವ್ಯವಹರಿಸುತ್ತಿದ್ದು, ಈ ವರ್ಷ ತನ್ನ ಷೇರುದಾರರಿಗೆ ಗರಿಷ್ಠ ಶೇ. 9ರಂತೆ ಡಿವಿಡೆಂಡ್ ನೀಡಿದೆ.

ಮೊದಲಿಗೆ ಶೇ. 10 ಡಿವಿಡೆಂಡ್ ಕೊಡಲು ನಿರ್ಧರಿಸಿದ್ದು, ಶೇ. 9ರ ಮಿತಿಯ ಕಾರಣ, ಉಳಿದ ಶೇ. 1 ಭಾಗವನ್ನು ಮುಂದಿನ ಲಾಭಾಂಶಕ್ಕೆ ಸೇರಿಸುವುದಕ್ಕಾಗಿ ಮೀಸಲಿಡಲು ತೀರ್ಮಾನಿಸಲಾಯಿತು.

ಬ್ಯಾಂಕು ಕಳೆದ ವರ್ಷ ಶೇ. 3ರಂತೆ ಡಿವಿಡೆಂಡ್ ನೀಡಿತ್ತು, ಅದಕ್ಕೆ ಹಿಂದಿನ 7 ವರ್ಷಗಳಲ್ಲಿ ಲಾಭ ಇಲ್ಲದ್ದರಿಂದ ಡಿವಿಡೆಂಡ್ ನೀಡಿರಲಿಲ್ಲ.

## ಚಿತ್ರನಟ ಅರವಿಂದ್ ಶೃಂಗೇರಿಗೆ

ಶೃಂಗೇರಿ : 'ಅನುಭವ', 'ಬೆಟ್ಟದ ಹೂವು' ಮತ್ತು ಇತ್ತೀಚಿನ 'ಶಂಖ ನಾದ' ಚಿತ್ರಗಳಿಗಾಗಿ ಪ್ರಶಸ್ತಿ ಪಡೆದ ಸುಪ್ರಸಿದ್ಧ ಹಾಸ್ಯ ನಟ ಅರವಿಂದ್‌ರವರು ಡಿಸೆಂಬರ್ 5ರಂದು ಶೃಂಗೇರಿಯಲ್ಲಿ ನಾಟಕವೊಂದರಲ್ಲಿ ಭಾಗವಹಿಸಲು ಒಪ್ಪಿಕೊಂಡಿದ್ದಾರೆಂದು 'ಕಲಾರಂಗ' ಬಳಗ ತಿಳಿಸಿದೆ.

ಸ್ವತಃ ಅರವಿಂದ್ ಅವರೇ ಬರೆದಿರುವ 'ಅವಳ ಸುತ್ತ....' ಎಂಬ ಈ ನಾಟಕವನ್ನು ರಮೇಶ್ ಎಸ್. ವಿ. ನಿರ್ದೇಶಿಸಿದ್ದಾರೆ. ನವೋದಯ ಸಂಸ್ಥೆಯ ಸಹಾಯಾರ್ಥ ನಡೆವ ಈ ನಾಟಕದಲ್ಲಿ ಮಲೆನಾಡಿನ ಆಯ್ದ ಕಲಾವಿದರು ಪಾಲ್ಗೊಳ್ಳಲಿದ್ದಾರೆಂದು ಬಳಗದ ಪ್ರಕಟಣೆ ತಿಳಿಸಿದೆ.

## ಸಣ್ಣ ಪ್ಲಾಂಟೇಶನ್ ಬೆಳೆಗಾರರಿಗೆ ಕೃ.ಆ.ಕರ ವಿನಾಯ್ತಿ/ರಿಯಾಯ್ತಿ

ಕೊಪ್ಪ : ಪ್ಲಾಂಟೇಶನ್ ಬೆಳೆಗಳನ್ನು ಬೆಳೆಯುವ ಎಲ್ಲರೂ ಕೃಷಿ ಆದಾಯ ತೆರಿಗೆ ಕಟ್ಟಬೇಕೆಂದು ಈವರೆಗೆ ಇದ್ದ ನಿಯಮದಲ್ಲಿ ಈಚೆಗೆ ಕೆಲವು ವಿನಾಯ್ತಿ/ರಿಯಾಯ್ತಿಗಳನ್ನು ಮಾಡಲಾಗಿದೆ.

ಇದರಂತೆ 15 ಎಕರೆಯೊಳಗಿನ ಕಾಫಿ ಬೆಳೆಗಾರರಿಗೆ ಈ ತೆರಿಗೆಯಿಂದ ಸಂಪೂರ್ಣ ವಿನಾಯ್ತಿಯಿದೆ. ಅದಕ್ಕಿಂತ ಹೆಚ್ಚಾಗಿ 20 ಎಕರೆವರೆಗಿನವರು ಕಾಂಪೌಂಡ್ ಟ್ಯಾಕ್ಸ್ ಎಂದು 1500 ರೂ ಗಳನ್ನೂ 25 ಎಕರೆ ವರೆಗಿನವರು 2500 ರೂ. ಕಾಂ. ಟ್ಯಾಕ್ಸನ್ನು ಕೊಡಬೇಕಾಗಿದೆ. ಅದಕ್ಕಿಂತ ಹೆಚ್ಚಿನ ವಿಸ್ತೀರ್ಣಕ್ಕೆ ಪ್ರತಿ ವರ್ಷ ಉತ್ಪನ್ನದ ಲೆಕ್ಕ ಕೊಟ್ಟು ತೆರಿಗೆ ನಿಷ್ಕರ್ಷೆ ಮಾಡಿಸಿಕೊಳ್ಳಬೇಕು.

(15 ಎಕರೆಗಿಂತ ಹೆಚ್ಚಿನ ಬೆಳೆಗಾರರು ಸಹ ಇಷ್ಟಪಟ್ಟಲ್ಲಿ ಲೆಕ್ಕ ಕೊಟ್ಟು ತೆರಿಗೆ ನಿಷ್ಕರ್ಷೆ ಮಾಡಿಸುವ ಮೂಲಕ ತಮಗೆ ಅನ್ವಯವಾಗುವ ವಿನಾಯ್ತಿಗಳಿದ್ದಲ್ಲಿ ಪಡೆದುಕೊಳ್ಳಬಹುದು.)

ಈ ವಿನಾಯ್ತಿ/ರಿಯಾಯ್ತಿಗಳು 1985 86ನೇ ತೆರಿಗೆ ವರ್ಷದಿಂದಲೂ ಅನ್ವಯಿಸುತ್ತವೆ.

ಆದರೆ 15 ಎಕರೆಗಿಂತ ಕಡಿಮೆಯಿರುವವರು ಸಹ ಈ ಬಗೆಗಿನ ಲೆಕ್ಕವನ್ನು ಫಾರ್ಮ್ ನಂ. 23ರಲ್ಲಿ ಪ್ರತಿ ವರ್ಷ ಸಲ್ಲಿಸಲೇಬೇಕಾಗಿದೆ

## ನ. 11ರಂದು ಕೊಪ್ಪಕ್ಕೆ ಸಹಕಾರಮಂತ್ರಿ ಏಕಾಂತಯ್ಯ

ಕೊಪ್ಪ: ರಾಜ್ಯದ ಸಹಕಾರ ಮಂತ್ರಿ ಏಕಾಂತಯ್ಯ ಅವರು ನ. 11ರಂದು ಕೊಪ್ಪಕ್ಕೆ ಭೇಟಿ ನೀಡಲಿದ್ದಾರೆಂದು ತಿಳಿದು ಬಂದಿದೆ.

ಇಲ್ಲಿನ ತಾ ವ್ಯ ಮಾ. ಸ. ಸಂಘದ ನೂತನ ಉಗ್ರಾಣ ಕಟ್ಟಡವನ್ನು ಅವರು ಅಂದು ಉದ್ಘಾಟಿಸುವರು. ಶಾಸಕರು ಅಧ್ಯಕ್ಷತೆ ವಹಿಸಲಿದ್ದು, ಡಿ. ಸಿ ಸಿ. ಬ್ಯಾಂಕ್ ಅಧ್ಯಕ್ಷ ಕಜ್ಜೋಡಿ ಶ್ರೀನಿವಾಸ್ ಮುಖ್ಯ ಅತಿಥಿಯಾಗಿರುವರು.

## ಅಕ್ರಮ ನಾಟ ವಶ

ಶೃಂಗೇರಿ : ಇಲ್ಲಿಗೆ ಸಮೀಪದ ಯಡದಳ್ಳಿ ಬಳಿ ಸುಮಾರು 7000 ರೂ.ಗೂ ಹೆಚ್ಚು ಬೆಲೆಯ ನಂದಿ ಮತ್ತು ನೀಲಿ ಜಾತಿಯ ನಾಟಾವನ್ನು ವಶಪಡಿಸಿಕೊಂಡು, ರವೀಂದ್ರ ಮತ್ತು ಇತರ 6 ಜನರನ್ನು ಬಂಧಿಸಿ 4000 ರೂ. ದಂಡದೊಂದಿಗೆ ಜಾಮೀನಿನ ಮೇಲೆ ಬಿಡುಗಡೆ ಮಾಡಿರುವುದಾಗಿ ವಲಯ ಅರಣ್ಯಾಧಿಕಾರಿ ಸೈಯದ್ ಗಫಾರ್ ತಿಳಿಸಿದ್ದಾರೆ.

---

ಈಚೆಗೆ ಬಂದಿರುವ ಸರ್ಕಾರಿ ಆದೇಶವೊಂದರ ಈ ಅಂಶಗಳನ್ನು ಇಲ್ಲಿನ ಆಡಿಟರ್ ಎಚ್. ವಿ. ಶ್ರೀನಿವಾಸ ರಾವ್ ಅವರು 'ಮುಂಜಾವು'ಗೆ ತಿಳಿಸಿದ್ದಾರೆ.

## ಕ.ವಿ.ಮಂ. ಮೀಟರ್ ರೀಡರ್ ವಿರುದ್ಧ ಗ್ರಾಮಸ್ಥರ ದೂರು: ಕ್ರಮಕ್ಕೆ ಮಂಡಲ ಪಂಚಾಯ್ತಿ ಮನವಿ

ಕಟ್ಟಿನಮನೆ : ಇಲ್ಲಿನ ಸುತ್ತ ಮುತ್ತ ವಿದ್ಯುತ್ ಮೀಟರ್ ರೀಡಿಂಗ್ ನಡೆಸುವ ವೆಂಕಟೇಶ್ ಎಂಬ ಕ. ವಿ. ಮಂ. ನೌಕರ ಮೀಟರ್ ರೀಡಿಂಗಿಗೂ ಬರದೆ, ಬಿಲ್ಲನ್ನೂ ಕಳಿಸದೆ ಇದ್ದಕ್ಕಿದ್ದಂತೆ ಸಂಪರ್ಕ ಕಡಿತದ ಆದೇಶ ಮಾತ್ರ ಕಛೇರಿಯಿಂದ ಬರುತ್ತಿದ್ದು, ಇದರಿಂದ ಜನರಿಗೆ ಬಹಳ ಕಿರುಕುಳ ಉಂಟಾಗಿರುವುದಾಗಿ ದೂರಲಾಗಿದೆ.

ಗ್ರಾಮಸ್ಥರ ಈ ದೂರಿನ ಮೇರೆಗೆ ಅ. 28ರ ಆಡುವಳ್ಳಿ ಮಂಡಲ ಪಂಚಾಯ್ತಿ ಸಭೆ ನಿರ್ಣಯ ಮಾಡಿ ಈ ತೊಂದರೆ ನಿವಾರಿಸುವಂತೆ ಇಲಾಖೆಗೆ ಮನವಿ ಮಾಡಿದೆ.

ಈ ಪ್ರದೇಶದ ಮೀಟರ್ ರೀಡರ್ ಹುದ್ದೆ ಖಾಲಿ ಇದ್ದು, ಬನ್ನೂರು–ಮಾಗುಂಡಿ ಪ್ರದೇಶಕ್ಕೆ ಸೇರಿದ ಈತನಿಗೆ ಈ ಪ್ರದೇಶವನ್ನೂ ಹೆಚ್ಚುವರಿಯಾಗಿ ನೀಡಿರುವುದಾಗಿ ಈತ ಹೇಳಿಕೊಳ್ಳುತ್ತಾರೆ. ಆದರೆ ಈ ಎರಡೂ ಪ್ರದೇಶಗಳಲ್ಲೂ ಈತ ಸರಿಯಾಗಿ ಕರ್ತವ್ಯ ನಿರ್ವಹಿಸುತ್ತಿಲ್ಲವೆಂಬ ದೂರು ಇದೆ.

ಕಳೆದ ವರ್ಷ ಪೂರ್ತಿ ರೀಡಿಂಗ್‌ಗೆ ಬಾರದೆ, ಬಿಲ್ಲನ್ನು ಸರಿಯಾಗಿ ಕಳಿಸದೆ ಲೈನ್‌ಮನ್‌ಗೆ ಸಂಪರ್ಕ ಕಡಿತದ ಆದೇಶ ಮಾತ್ರ ಕೊಟ್ಟು ಕಳಿಸುತ್ತಿದ್ದ ಈತನ ವಿರುದ್ಧ ಜಿಲ್ಲಾ ಪತ್ರಿಕೆಯೊಂದರಲ್ಲಿ ವರದಿ ಬಂದು, ಅನಂತರ ಜಿ. ಪ. ಸದಸ್ಯೆ ಬಿ. ಸಿ. ಗೀತಾ ಅವರು ಕೂಡ ಈ ಬಗ್ಗೆ ಒತ್ತಾಯಿಸಿದ ನಂತರ ಅ. 9 ರಂದು ಒಂದು ರೀಡಿಂಗ್ ತೆಗೆದುಕೊಂಡು, ಗ್ರಾಮಸ್ಥರಿಗೆಲ್ಲ ಹೀನಾಯವಾಗಿ ಮಾತನಾಡಿ ಹೋದವನು ಇನ್ನೂ ಬಿಲ್ ಕಳಿಸಿಲ್ಲ ಎಂದು ದೂರು ಬಂದಿದೆ.

ಕಾರ್ಯ ವ್ಯಾಪ್ತಿಯ ಪ್ರದೇಶ ಜಾಸ್ತಿಯಿರುವ ಕಾರಣವಾದರೆ, 2 ತಿಂಗಳಿಗೊಮ್ಮೆಯಾದರೂ ರೀಡಿಂಗಿಗೆ ಬರಲಿ ಅಥವಾ ನಾವೇ ಲೈನ್‌ಮನ್ ಮೂಲಕ ರೀಡಿಂಗ್ ಕಳಿಸುತ್ತೇವೆ (ಇದು ನಿಯಮದ ರೀತ್ಯಾ ತಪ್ಪಾದರೂ ಅನಿವಾರ್ಯ ಕಾರಣಕ್ಕಾಗಿ); ಅಂತೂ ಬಿಲ್ ಕ್ರಮವಾಗಿ ಕಳಿಸಲಿ ಎಂಬುದು ಗ್ರಾಮಸ್ಥರ ಹೇಳಿಕೆ. ಅಲ್ಲದೆ ಈತ ಆಡಿರುವ ಹೀನಾಯದ ಮಾತುಗಳ ಬಗ್ಗೆ ಗ್ರಾಮಸ್ಥರ ಕ್ಷಮಾಪಣೆ ಕೇಳಬೇಕೆಂದೂ ಒತ್ತಾಯಿಸಲಾಗಿದೆ

ಕ. ವಿ. ಮಂ.– ಈ ಸಮಸ್ಯೆಯ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳುವಂತೆ ಮಂಡಲ ಸಭೆ ಒತ್ತಾಯ ಪೂರ್ವಕ ಮನವಿ ಮಾಡಿದೆ.

## ಕೊಪ್ಪದಲ್ಲಿ ಸಚಿವರ ಸಮ್ಮುಖ ಮಂ. ಪ್ರಧಾನರ ಸಭೆ ಬರಪರಿಹಾರಕಾಮಗಾರಿಗುರುತಿಸಲು ಸಲಹೆ

ಕೊಪ್ಪ : ಶೃಂಗೇರಿ ವಿಧಾನ ಸಭಾ ಕ್ಷೇತ್ರದ ಮೂರೂ ತಾ॥ಗಳ ಮಂಡಲ ಪ್ರಧಾನರ ಸಭೆ ಅ. 13 ರಂದು ಇಲ್ಲಿ ನಡೆಯಿತು. ತುರ್ತಾಗಿ ಕರೆದಿದ್ದ ಈ ಸಭೆಯಲ್ಲಿ ಸಚಿವ ಬಿ. ಎಲ್. ಶಂಕರ್, ಶಾಸಕರು, ಜಿ. ಪ. ಅಧ್ಯಕ್ಷರು, ಮುಖ್ಯ ಕಾರ್ಯದರ್ಶಿಗಳು ಮತ್ತು ಬಿಡಿಒಗಳು ಭಾಗವಹಿಸಿದ್ದರು.

ಆಯಾ ಮಂಡಲದ ವ್ಯಾಪ್ತಿಯಲ್ಲಿ ಬರಪರಿಹಾರ ಸಂಬಂಧವಾದ ಕಾಮಗಾರಿಗಳನ್ನು ಗುರುತಿಸಿ, 25 ಸಾವಿರ ರೂ. ವರೆಗೂ ಸಲಹೆಗಳನ್ನ ಕಳಿಸಲು ಸೂಚಿಸಲಾಯಿತು. ಹಲವು ಪ್ರಧಾನರು ತಮ್ಮ ಮಂಡಲಗಳ ಕುಂದು ಕೊರತೆಗಳನ್ನು ಸಭೆಯಲ್ಲಿ ಹೇಳಿದರು.

### ಟೀಕೆ

"25 ಸಾವಿರ ರೂ ವರೆಗೆ ಕಾಮಗಾರಿ ಸೂಚಿಸಲು ತಿಳಿಸಿದ್ದು ಹೊರತು ಆ ಸಭೆಯಲ್ಲಿ ಮತ್ಯಾವ ಚರ್ಚೆಯೂ ನಡೆಯಲಿಲ್ಲ. ಕೇವಲ ಇಷ್ಟಕ್ಕಾಗಿ ಮೂರೂ ತಾ॥ಗಳ ಪ್ರಧಾನರೆಲ್ಲ ಕರೆಸಿ, ಸಮಯ, ಹಣ ಎಲ್ಲ ವ್ಯರ್ಥ ಮಾಡುವ ಬದಲು ಒಂದು ಸುತ್ತೋಲೆ ಕಳಿಸಬಹುದಿತ್ತು." ಎಂದು ಕೆಲವು ಮಂಡಿ ಪ್ರಧಾನರು ಈ ಸಭೆಯ ಬಗ್ಗೆ ಟೀಕಿಸಿದ್ದಾರೆ.

ಆದರೆ ಶಾಸಕರು, ಬಿಡಿಒಗಳು ಮತ್ತು ಮಂಡಲ ಪ್ರಧಾನರು ಒಟ್ಟಾಗಿ ಒಂದೇ ಕಡೆ ಚರ್ಚಿಸಿ ಪ್ರಥಮ ಆದ್ಯತೆಯ ಕಾಮಗಾರಿಗಳ ಪಟ್ಟಿ ತಯಾರಿಸುವುದರಿಂದ ವಿವಿಧ ಹಂತಗಳಲ್ಲಿ ಆಗುವ ವಿಳಂಬವನ್ನು ತಪ್ಪಿಸುವುದ. ಈ ತುರ್ತು ಸಭೆಯ ಉದ್ದೇಶವಾಗಿತ್ತೆಂದೂ ಅಂಥ 'ಆ್ಯಕ್ಷನ್ ಪ್ಲಾನ್' ಒಂದನ್ನು ಅಂದೇ ತಯಾರಿಸಲು ಸಾಧ್ಯವಾಯಿತೆಂದೂ ಅಧಿಕಾರಿ ಮೂಲಗಳ ಹೇಳಿಕೆ.

## ಕೊಪ್ಪದಲ್ಲಿ ಸಂಭ್ರಮದ ರಾಜ್ಯೋತ್ಸವ — ಮೆರವಣಿಗೆ ; 'ಕಣ್ಣಾ ಮುಚ್ಚಾಲೆ' ಕವನಸಂಕಲನ ಬಿಡುಗಡೆ

ಕೊಪ್ಪ : ರಾಜ್ಯೋತ್ಸವದ ಅಂಗವಾಗಿ ಸಾಮಾಜಿಕ, ಐತಿಹಾಸಿಕ, ರಾಜಕೀಯ ಮತ್ತು ಧಾರ್ಮಿಕ ವಸ್ತು–ವಿಷಯಗಳನ್ನೊಳಗೊಂಡ ವಿವಿಧ ಸ್ಥಿರ ಚಿತ್ರ (ಟ್ಯಾಬ್ಲೋ)ಗಳೊಂದಿಗೆ ಆಕರ್ಷಕವಾದ ಮೆರವಣಿಗೆ ಇಲ್ಲಿ ನಡೆಯಿತು.

ನರ್ಸರಿ ಶಾಲೆಗಳ ಚಿಕ್ಕ ಪುಟ್ಟ ಮಕ್ಕಳಿಂದ ಹಿಡಿದು ಕಿರಿಯ ಕಾಲೇಜು, ದೈ. ಶಿಕ್ಷಣ ಸಂಸ್ಥೆಯವರೆಗಿನ ವಿವಿಧ ಶಾಲಾ ಕಾಲೇಜುಗಳು, ಸಂಘ ಸಂಸ್ಥೆಗಳು ಸ್ಥಿರ ಚಿತ್ರಗಳನ್ನು ಸಂಯೋಜಿಸಿದ್ದರು.

ಸಂಜೆ ಗೋವಿಂದ ಗೌಡರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಪ್ರ. ದ. ಕಾಲೇಜು ಉಪನ್ಯಾಸಕರಾದ ಮಲ್ಲಿಕಾರ್ಜುನಯ್ಯ ಮುಖ್ಯ ಭಾಷಣಕಾರರಾಗಿದ್ದರು. ಚಿದಂಬರ್, ಮಂಜುನಾಥ ಶೆಟ್ಟಿ ಅತಿಥಿಗಳಾಗಿದ್ದು, ಮನೋಹರ ರಾವ್ ಬಹುಮಾನ ವಿತರಣೆ ಮಾಡಿದರು.

ಮಲೆನಾಡಿನ ಕವಿ ಹೊ. ನ. ಕೃಷ್ಣಪ್ಪನವರ 'ಕಣ್ಣಾ ಮುಚ್ಚಾಲೆ' ಕವನ ಸಂಕಲನವನ್ನು ಗೋವಿಂದ ಗೌಡರು ಬಿಡುಗಡೆ ಮಾಡಿದರು. ಬಿಡಿಒ ರಾಮಮೂರ್ತಿ ಈ ಸಂಕಲನದಿಂದ ದಿ॥ ದೇವೇಗೌಡರ ಸ್ಮರಣೆಯ ಕವನವೊಂದನ್ನು ಪ್ರೇಕ್ಷಕರ ಮೆಚ್ಚುಗೆ ಮತ್ತು ಅಭಿಮಾನದ ಕರತಾಡನಗಳ ಮಧ್ಯೆ ಭಾವಪೂರ್ಣವಾಗಿ ವಾಚನ ಮಾಡಿದರು. ಈ ಕಾರ್ಯಕ್ರಮ ಇಡೀ ಸಮಾರಂಭಕ್ಕೆ ಕಳೆ ಕಟ್ಟಿತು. (ಪುಸ್ತಕದ ಸುಮಾರು 50 ಪ್ರತಿಗಳು ಅಲ್ಲೇ ಮಾರಾಟವಾದವು.)

ಅನಂತರ ವಿವಿಧ ಶಾಲೆ–ಕಾಲೇಜುಗಳ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಂದ ಮನರಂಜನಾ ಕಾರ್ಯಕ್ರಮಗಳು ನಡೆದವು.

### ದೀಪಾವಳಿಯ ವೇಷಗಳ ಬಗ್ಗೆ ಒಂದು ಅನ್ನಿಸಿಕೆ :

# ದಲಿತರ ದೀಪಾವಳಿ ಈ ಥರವೆ ?

ಅವಿದ್ಯಾವಂತ ದಲಿತ ವರ್ಗದ ಜನರನ್ನು ನೋಡಿದಾಗ, ಸಹಸ್ರಾರು ವರ್ಷಗಳಿಂದ ತುಳಿದಿಟ್ಟು ನಿಷ್ಕ್ರಿಯವಾಗಿರುವ ಇವರ ಬುದ್ಧಿಗೆ 'ಬ್ರೈನ್ ವಾಶ್' ಮಾಡಲು ಈಗಿನ ವ್ಯವಸ್ಥೆಯಲ್ಲಿ ಇನ್ನೂ ಒಂದು ನೂರು ವರ್ಷವಾದರೂ ಬೇಕೇನೋ ! ಎಂದು ಒಮ್ಮೊಮ್ಮೆ ಅನ್ನಿಸುತ್ತದೆ. ಮೊನ್ನೆ ಬಂದು ಹೋದ ದೀಪಾವಳಿಯನ್ನು ಪ್ರತಿವರ್ಷದಂತೆ ಈ ವರ್ಷವೂ ಈ ವರ್ಗದ ಜನ ಆಚರಿಸಿದ ರೀತಿಯನ್ನು ನೋಡಿದಾಗ ಈ ಅನ್ನಿಸಿಕೆ ಮತ್ತೊಮ್ಮೆ ಮರುಕಳಿಸಿತು.

ದೀಪಾವಳಿಯ ಸಂಭ್ರಮವೆಂದರೆ ಕೆಲವರಿಗೆ ನರಕ ಚತುರ್ದಶಿಯಾದರೆ ಕೆಲವರಿಗೆ ಧನ ಲಕ್ಷ್ಮೀ ಪೂಜೆ; ಇನ್ನು ಕೆಲವು ವರ್ಗದವರಿಗೆ ಪರಲೋಕದ ಪದವಿಯ ಆಶೆಯಿಂದ ಯಾಗ ಮಾಡಿ ತುಳಿತಕ್ಕೆ ಒಳಗಾದ ಮಹಾದಾನಿ ಬಲಿಚಕ್ರವರ್ತಿಯ ಪಾಡ್ಯ, ಇನ್ನು ಹೆಚ್ಚಿನ ಜನರಿಗೆ ಪಟಾಕಿ ಸುಡುವ ಹಬ್ಬ.

ಆದರೆ ನಮ್ಮ ದಲಿತರು ದೀಪಾವಳಿ ಆಚರಿಸುವ ರೀತಿಯೇ ಬೇರೆ. ಕನಿಷ್ಠ ದರ್ಜೆಯ, ಅಗ್ಗದ ಹಾಸ್ಯದ ವೇಷದ ಹಾವಳಿ. ಮೈಯೆಲ್ಲಾ ಮಸಿ ಬಳಿದುಕೊಂಡು ಕೀರಲು ಧ್ವನಿಯಲ್ಲಿ ಮಾತನಾಡಿ ದಾರಿಯಲ್ಲಿ ಸಿಕ್ಕಿದವರನ್ನು ಅಡ್ಡ ಹಾಕಿ ಬೇಡುವ ಕೊರಗ ವೇಷ, ಕರಡಿ, ಸಿಂಹ ಹಾಗೂ ಇನ್ನಿತರ ವೇಷಗಳು ಪೇಟೆಯ ಮುಂದಿ ಕೊಡುವ 50 ಪೈಸೆ, 1 ರೂ ಗಳನ್ನು ಒಟ್ಟು ಮಾಡುತ್ತಾ ಸಾಗುವ, ಹೆಚ್ಚಾಗಿ ದಲಿತರೇ ಹಾಕುವ ಈ ವೇಷಗಳನ್ನು ನೋಡಿದರೆ ಇವರ ಬಗ್ಗೆ ಸಿಟ್ಟು, ಅನುಕಂಪಕ್ಕಿಂತಲೂ ಹೆಚ್ಚಾಗಿ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಅಂತರ್ಗತವಾಗಿ, ಸ್ವಾತಂತ್ರ್ಯ ಬಂದು 40 ವರ್ಷಗಳಾದರೂ ಹರಿಯುತ್ತಿರುವ ಅಜ್ಞಾನದ ಬಗ್ಗೆ, ಇದನ್ನು ಪೋಷಿಸುವ ನಮ್ಮ ರಾಜಕೀಯ ವ್ಯವಸ್ಥೆಯ ಬಗ್ಗೆ ಮನಸ್ಸು ಆಕ್ರೋಶಗೊಳ್ಳುತ್ತದೆ.

ಇದನ್ನು ಕಲೆಗಾಗಿಯಾಗಲಿ ಹೊಟ್ಟೆಯ ಪಾಡಿಗಾಗಲೀ ಮಾಡುತ್ತಿಲ್ಲ. ಕೇವಲ ದೀಪಾವಳಿ ಸಮಯದ ಕುಡಿತದ ಖರ್ಚಿಗಾಗಿ ಇಂತಹ ವೇಷ ಹಾಕಿ ಕುಡಿದು ಕುಣಿದು ಕುಪ್ಪಳಿಸಿ ಸಾಯಂಕಾಲ ಚರಂಡಿಯಲ್ಲಿ ಮಲಗುತ್ತಾರೆ. ಬೇರೆ ಯಾವ ವೇಷಕ್ಕಿಂತಲೂ ಹೆಚ್ಚು ಹೃದಯವನ್ನು ಹಿಂಡುವುದು 'ಕೊರಗ ವೇಷ' ಇಂದು ಈ ವೇಷ ತನ್ನ ಧ್ವನಿಯನ್ನು ಕಳೆದು ಕೊಂಡಿದ್ದರೂ ಒಂದು ಕಾಲದಲ್ಲಿ ಈ ವರ್ಗದ ತುಳಿತದ ನೋವಿನ ಭಾವನೆಯನ್ನು ಪ್ರತಿಬಿಂಬಿಸುವ ವೇಷವಾಗಿದ್ದಂತೂ ಸತ್ಯ. ತನ್ನ ಸೊಂಟದ ಸುತ್ತ ಗೆಜ್ಜೆ ಕಟ್ಟಿಕೊಂಡು ಕೊಳಲು ಊದುತ್ತಾ ಲಯಬದ್ಧವಾಗಿ ಕುಣಿಯುವ ಈ ಕೊರಗನ ಕೊಳಲಿನ ಧ್ವನಿ, ಗೆಜ್ಜೆಯ ಧ್ವನಿ ಹೃದಯ ವಿದ್ರಾವಕ.

ದಕ್ಷಿಣ ಕನ್ನಡದವರಾದ ಈ ಕೊರಗರು ಹಿಂದಿನ ಕಾಲದಲ್ಲಿ ಊರಿನ, ಕೇರಿಯ ಜನರ ಸಹವಾಸವೇ ಬೇಡ ಎಂದು ಪ್ರಕೃತಿಯ ಮಡಿಲಾದ ಕಾಡಿನಲ್ಲಿ ವಾಸಿಸುತ್ತಿದ್ದರು. ಆರೋಗ್ಯ ಪೂರ್ಣ ಅಂಗ ಸೌಷ್ಠವ ಇರುವ ಇವರಿಗೆ ಕಾಡಿನವರು (ತುಳು : "ಕಾಡಿ ನಕ್ಲ್") ಎಂಬ ಹೆಸರೂ, ಮೈಗೆ ಬಟ್ಟೆಯ ಬದಲು ಸೊಪ್ಪು ಸುತ್ತುತ್ತಿದ್ದುದರಿಂದ ಸೊಪ್ಪಿನವರು ಎಂಬ ಹೆಸರೂ ಇವೆ. ಇಂದು ಪಟ್ಟಣ ಪ್ರದೇಶದಲ್ಲಿ ಜಾತಿ ಭೇದ ಇಲ್ಲದೆ ಬಡವರೆಲ್ಲಾ ಎಂಜಲನ್ನ ತಿನ್ನುವ ಪರಿಸ್ಥಿತಿ ಇದ್ದರೂ, ಅಂದಿನಿಂದ ಇಂದಿಗೂ ದ. ಕ. ದಲ್ಲಿ ಇದು ಇವರಿಗೆ ಮೀಸಲು !

ಈ ಎಂಜಲು ತಿನ್ನುವ ಬಗ್ಗೆ ಹಿಂದೊಮ್ಮೆ ನಾನು ಇವರಿಗೆ ಕೇಳಿದ್ದೆ. ಅದಕ್ಕೆ ಅವರು, "ಈ ಸಮಾಜದ ಮೂಲವೇ ನಾವು (ಈ ಬಗ್ಗೆ ದ.ಕ.ದಲ್ಲಿ ಒಂದು ಜಾನಪದದಂತ ಕತೆಯೇ ಇದೆ.) ನಮ್ಮಿಂದ ಉದಿಸಿದ ಈ ಸಮಾಜದ ಜನರು ನಮ್ಮ ಮಕ್ಕಳು. ಮಕ್ಕಳ ಎಂಜಲು ತಿಂದರೆ ತಪ್ಪಿಲ್ಲ" ಅಂದಿದ್ದರು !

'ಕೊರಗ ಹೆಂಗಸರಿಗೆ ಅನ್ನದಾನ ಹಾಗೂ ತಲೆಗೆ ನಾವೇ ಸುರಿದು ಎಣ್ಣೆ ದಾನ ಮಾಡಿದರೆ ಪರಮ ಪುಣ್ಯ' ಎಂಬುದು ದ. ಕ. ದಲ್ಲೊಂದು ಜನಪದ ನಂಬಿಕೆ. ಅದೇನೇ ಇದ್ದರೂ ಇವರು ಮಕ್ಕಳೆಂದು ಭಾವಿಸುವ ಈ ಸಮಾಜ ಮಾತ್ರ ಇವರಿಗೆ ಕೃತಘ್ನನಾಗಿ ಇವರಿಂದ ಮಲವನ್ನೂ ಹೊರಿಸಿತ್ತು. ಆದರೆ ಇವರು ಮಾತ್ರ ಇದನ್ನೂ 'ಹೆತ್ತವರ ಮಮತೆ'ಯಿಂದಲೇ ಮಾಡಿರಬಹುದು !

ಬ್ರಿಟಿಷರಿಂದ ಈ ದೇಶದಲ್ಲಿ ನಡೆದ ಅಕ್ಷರ ಚಳವಳಿಯಿಂದಾಗಿಯೂ, ಇವರಲ್ಲಿ ಕೆಲವರಲ್ಲಾದರೂ ದ. ಕ. ಜನರ ಚೈತನ್ಯ ಶೀಲತೆ ಇದ್ದದರಿಂದಲೂ, ಸರ್ಕಾರದ ಸವಲತ್ತುಗಳನ್ನು ಉಪಯೋಗಿಸಿ ಈ ಸಮಾಜ ಹೊರಿಸಿದ ಮೌಢ್ಯವನ್ನು ಹರಿದು ಹೊರಬಂದು ಮೇಲೇರಿದವರೂ ಇದ್ದಾರೆ; "ಮನು ಸೋದರಾಃ ಹೈಂದವಃ" ಎಂದು ಘೋಷಿಸುತ್ತಾ ದೇವರುಗಳಿಗೆ ಚಿನ್ನದ ರಥ, ಬೆಳ್ಳಿಯ ಬಾಗಿಲು, ವಜ್ರದ ಕಿರೀಟ ಮಾಡಿಸುತ್ತಾ, ವಿಶ್ವಶಾಂತಿಯ ನೆಪದಿಂದ ಯಜ್ಞ ಯಾಗ ಮಾಡಿ ತಿಂದು ತೇಗುವ ಮಠ ಮಂದಿರಗಳು ಬಿಸಾಡುವ ಎಂಜಲನ್ನ ತಿಂದು ಬದುಕುವವರೂ ಇದ್ದಾರೆ. (ಈ ಬಗ್ಗೆ ಹಿಂದೊಮ್ಮೆ ಈ ಮಠ ಮಂದಿರಗಳು ಟೀಕೆಗೊಳಗಾಗಿ ಪತ್ರಿಕೆಗಳಲ್ಲೂ ಬಿಸಿ ಬಿಸಿ ಚರ್ಚೆ ನಡೆದಿದ್ದನ್ನು ಇಲ್ಲಿ ಸ್ಮರಿಸಬಹುದು.)

ಇಂತಹ ಒಂದು ದಲಿತ ವರ್ಗದ ವೇಷವನ್ನು ದಲಿತ ವರ್ಗದವರೇ ಹಾಕಿ ಈ ಜನಾಂಗದ ಲೇವಡಿ ನಡೆಸುತ್ತಿರುವುದು ಒಂದು ದೊಡ್ಡ ದುರಂತ. ಈ ಸಲದ ದೀಪಾವಳಿಯಲ್ಲಿ 48 ಕೊರಗ ವೇಷವನ್ನು ಈ ಜಯಪುರದ ಪೇಟೆಯಲ್ಲೇ ನೋಡಿದ್ದೇನೆ. ಇವರಲ್ಲಿ ಕೆಲವರಾದರೂ ಚರಂಡಿಯಲ್ಲಿ ಮಲಗುವ ಸ್ಥಿತಿಯಲ್ಲಿದ್ದರು. ದಕ್ಷಿಣ ಕನ್ನಡದಿಂದ ಇಲ್ಲಿಗೆ ವಲಸೆ ಬಂದ ಹರಿಜನರು ಹಾಕುತ್ತಿದ್ದ ಈ ವೇಷ ಇತ್ತೀಚಿನ ವರ್ಷಗಳಲ್ಲಿ ಸ್ಥಳೀಯ ಹರಿಜನರನ್ನೂ ಆಕರ್ಷಿಸುತ್ತಿರುವುದು ಮತ್ತೂ ವಿಷಾದದ ಸಂಗತಿ.

(3ನೇ ಪುಟಕ್ಕೆ)

ಕೃಷ್ಣ ಭಂಡಾರಿ,
ಜಯಪುರ

---

## ಪದ್ಯದಂಕಣ

### ಚಳಿಗಾಲ

ಮುಗಿಯಿತಪ್ಪಾ ಮಳೆಗಾಲ ಎಂದಾಗ,
ಬಂತಪ್ಪ ಚಳಿ
ಎಂದು ಜರೆಯದಿರಿ, ಕೇಳಿ
ಮುಗಿದು ಅತ್ತೆಯ ಕಾಲ, ಈಗ ಸೊಸೆಯ
ಪಾಳಿ
ಹೆರಿದ ಹಚ್ಚಡ, ಜುಬ್ಬವನೆಲ್ಲ ರೆಡಿ
ಮಾಡಿಕೊಳ್ಳಿ
ಜೋಕೆ ! ಕೊನೆಗೆ ಎರಡಾದರು ಇರಲಿ
ಕಂಬಳಿ ನಿಮ್ಮ ಬಳಿ
ಮುದುಕರೆ ಮಕ್ಕಳೆ ನನ್ನ ಮಾತು ಕೇಳಿ
ಎಚ್ಚರಿಕೆ ! ಹೋಗದಿರಿ ಬೆಂಕಿಯ ಬಳಿ
ಬರುವುದು ಬಿಸಿಲಿನ ಕಾಲ ಕೊಂಚ ತಾಳಿ
ಅದುವರೆಗೆ ಹೇಗಾದರೂ ಸಹಿಸಿ ಕೊಳ್ಳಿ.
ಅಜ್ಜ, ಅಜ್ಜಿಯರೆ, ! ಪಾಪ ಬಲ್ಲೆ ನಾನೆಲ್ಲ
ಬಲು ಘೋರ ನಿಮಗೀ ಕಾಲ
ಸುಕ್ಕು ಗಟ್ಟಿದ ಚರ್ಮ, ಕುಗ್ಗಿದ ರಕ್ತ ಬಲ
ಮೆಲುಕು ಹಾಕಿರಿ ನಿಮ್ಮ ಹರೆಯ ಕಾಲ.
ಹಲವರಿಗೆ ಹಲವು ಬಗೆ
ಈ ಚಳಿಗಾಲ ! ಹೇಳಿ ನಿಮಗೆ ಹೇಗೆ ?
ಒಂಟಿ ಹಾಸಿಗೆಯೆ ? ಛೆ ನಾನೇನು ಹೇಳಲಿ
ನಿಮಗೆ
ಬಲು ಗೋಳು ಈ ಚಳಿಗಾಲದಿರುಳು,
ಯೋಚಿಸಿ ಬೇಗ
ಹಾಸಿಗೆ ವಿಸ್ತರಿಸುವ ಬಗೆ !

—ಎಸ್. ಎಸ್. ಸೀತಾರಾಂ,
ಸತ್ತೀಕಲ್ಲು

### ಹಕ್ಕಿಗಳಿಗೊಂದು ಕಿವಿಮಾತು !

ಎಲ್ಲಿ ಹೋಗುವಿರಿ,
ನಿಲ್ಲಿ ಹಕ್ಕಿಗಳೇ,
ಮುಗಿಲ ಎತ್ತರಕೆ ಹಾರಿ ?
ನಿಮಗೂ ಬೇಸರವೇ
ಈ ಮಾನವರು ಬದುಕ
ಸಾಗಿಸುವ ದಾರಿ ?
'ಧರ್ಮ'ವನೆ ಪಠಿಸುವರು
'ಸಮತೆ'ಯನೆ ಜಪಿಸುವರು
ಧರಿಸುವರು ಖಾದಿಯನ್ನೇ
ನೀತಿಯನೆ ಮರೆಯುವರು,
ದ್ವೇಷವನೆ ಬೆಳೆಸುವರು,
ಮಸೆಯುವರು ಕತ್ತಿಯನ್ನೇ !!
ನೀವು ಸಂಕುಲದಿ
ತೋರುತಿಹ ಬಲವನ್ನು
ನಾವಿಲ್ಲಿ ಕಾಣೆವೆಂದೂ
ನಿಲ್ಲಿ, ಹೋಗದಿರಿ,
ಇಲ್ಲೇ ಸಾರುತಿರಿ,
'ಒಗ್ಗಟ್ಟೇ ಬಲವು' ಎಂದು !!

—ಚಾವಲ್ಮನೆ ಸುರೇಶ್ ನಾಯಕ್.

### ನಿನಗಾಗಿ ಕಾಯುತ್ತ...

(ಬೆಂಜಮಿನ್ ಮೊಲಾಯ್ಸ್‌ಗೆ)

ನಿನಗಾಗಿ ಕಾಯುತ್ತ
ಹುಡುಕುತಿರುವೆ, ಹತ್ತು ಕವನಗಳನ್ನು
ನೂರು ಕನಸುಗಳನ್ನು
ಅರಳುವ ಕರಿ ಮೊಗ್ಗುಗಳನ್ನು,
ಗಿರಿ, ಕಂದರದ ಕಲ್ಲುಗಳಲ್ಲಿ ಬೆವರಿನ
ಹನಿಗಳನ್ನು !
ನಿನಗಾಗಿ ಕಾಯುತ್ತ
ನೋಡುತಿರುವೆ, ಕಾಯುವ
ಕಣ್ಣುಗಳನ್ನ
ಬಸವಳಿದ ಮೊಗಗಳನ್ನು
ಹಂಬಲಿಸುವ ಬಿಳಿ ದೇಹಗಳನ್ನು,
ಎದುರು ನೋಡುವ ಕರಿ ಕಂಗಳನ್ನು !
ನಿನಗಾಗಿ ಕಾಯುತ್ತ
ಲೋಚುತ್ತಿರುವೆ ಸ್ವಾತಂತ್ರ್ಯದ
ದಾರಿಗಳನ್ನು
ಹರಿಯುತ್ತಿರುವ ರಕ್ತಗಳನ್ನು,
ಕೆಣಕುವ ಕೂಗೆಗಳನ್ನು
ಹಾತೊರೆಯುವ ರಣಹದ್ದುಗಳನ್ನು !
ನಿನಗಾಗಿ ಕಾಯುತ್ತ
ನಿಂತಿರುವೆ, ನಾನಿಲ್ಲಿ
ಕೆಂಪು ಮಡುಗಟ್ಟಿದಲ್ಲಿ
ಬಾಸುಂಡೆಗಳೇಳುತ್ತಿರುವಲ್ಲಿ,
ಆಕ್ರಂದನಗಳು ಮುಗಿಲು
ಮುಟ್ಟುತ್ತಿರುವಲ್ಲಿ
ಬಿಳಿ ಸರಳುಗಳ ಹೊರಬಾಗಿಲಲ್ಲಿ
ನಿನಗಾಗಿ ಕಾಯುತ್ತ....... ಬರುವೆಯಾ??

ಎಂ. ಕೆ. ಹರೀಶ್ ಕಡತೂರು

(ಬೆಂಜಮಿನ್ ಮೊಲಾಯ್ಸ್ — ಆಫ್ರಿಕದ ಕ್ರಾಂತಿ ಕವಿ; ವರ್ಣ ಭೇದ ನೀತಿ ಅನುಸರಿಸುತ್ತಿರುವ ದ. ಆಫ್ರಿಕ ಸರ್ಕಾರದಿಂದ ಗಲ್ಲಿಗೇರಿಸಲ್ಪಟ್ಟವನು. —ಸಂ.)

## ಓದುಗರ ಪ್ರತಿಕ್ರಿಯೆಗಳು

### ವಾಸ್ತವಿಕ ಚಿತ್ರಣ

ಪ್ರಿಯರೆ,

ದಿನಾಂಕ 10 11.1987ರ ಸಂಚಿಕೆಯಲ್ಲಿ ಆ. ನಾ. ಸೇರಿಗಾರ್‌ರವರ "ಬಡವರ ಧ್ವನಿಯನ್ನು ಬ್ಯಾಂಕಿಗೆ ತಲುಪಿಸಿದ ಸಾಲ ಮೇಳ" ಲೇಖನ ತುಂಬಾ ಚೆನ್ನಾಗಿತ್ತು. ಅದರಲ್ಲಿ ಅವರು ಸಾಲಮೇಳದ ಕುರಿತಂತೆ ನಡೆಯುವ ವಾಸ್ತವಿಕ ಚಿತ್ರಣವನ್ನು ಮೂಡಿಸಿದ್ದಾರೆ.

ಇದೇ ರೀತಿ ಎಲ್ಲ ಇಲಾಖೆಗಳಲ್ಲಿ ನಡೆಯುವ ವಿಷಯಗಳನ್ನು ತಮ್ಮ ಪತ್ರಿಕೆ ಚಿತ್ರಿಸಲಿ ಎಂದು ಆಶಿಸುತ್ತೇನೆ.

ಲೇಖನದ ಕರ್ತೃವಿಗೂ, ಇಂತಹ ಲೇಖನವನ್ನು ಪ್ರಕಟಿಸಿದ್ದಕ್ಕಾಗಿ ತಮಗೂ ಅಭಿನಂದನೆಗಳು.

—ಎಚ್. ಜಿ. ಶಿವಶಂಕರ್
ಮತ್ತಾವನಿ, ಹರಿಹರಪುರ

(ಬೇರೆ ಇಲಾಖೆಗಳ ಬಗ್ಗೆಯೂ ಇಂಥ ಲೇಖನಗಳು ಬಂದಲ್ಲಿ ಪ್ರಕಟಿಸಲಾಗುವುದು. —ಸಂ.)

## ಸಾಲ ಮೇಳ : ಒಂದು ಸಮರ್ಥನೆ

"ಬಡವರ ಧ್ವನಿಯನ್ನು ಬ್ಯಾಂಕಿಗೆ ತಲುಪಿಸಿದ ಸಾಲಮೇಳ"— ಈ ಲೇಖನವು ಈ ಮೇಳದ ವಿವಿಧ ಮುಖಗಳನ್ನು ಪ್ರತಿಬಿಂಬಿಸುತ್ತಿರುವುದು ಸ್ತುತ್ಯರ್ಹ. ಅಲ್ಲದೆ "ನಲ್ಲಿಯ ನೀರನ್ನು ಅಗತ್ಯಕ್ಕೆ ಬಳಸದೆ ನಲ್ಲಿಯ ಮುಚ್ಚಳ (ಟಾಪ್) ತೆಗೆದು ನೀರನ್ನು ಚರಂಡಿಗೆ ಹರಿಸಿದಂತೆ" ಎಂಬ ಕುಹಕಿಗಳ ಮಾತಿಗೆ ಸರಿಯಾದ ಉತ್ತರವೂ ಆಗಿದೆ.

"ದುಡ್ಡಿರುವುದು ದುಡ್ಡನ್ನು ಬೆಳೆಸಲಿಕ್ಕಲ್ಲ, ಸಂಪತ್ತನ್ನು ಸೃಷ್ಟಿಸಲಿಕ್ಕೆ" ಎಂಬ ಜೆ. ಪಿ ಯವರ ಮಾತನ್ನು ನಾವು ನೆನಪಿಸಿ ಕೊಳ್ಳಬೇಕು. ಈಗ ದೇಶದಲ್ಲಿ ಆಸ್ತಿ ಮತ್ತು ನೌಕರಿ (ನೌಕರಿ ಎಂದರೆ ನಿರ್ದಿಷ್ಟ ಕೆಲಸ ಮತ್ತು ನಿರ್ದಿಷ್ಟ ಪ್ರತಿಫಲ-ಸಂಬಳ) ಇಲ್ಲದ ದೇಶದ ಅರ್ಧಭಾಗಕ್ಕಿಂತ ಹೆಚ್ಚಿರುವ ಜನರು ಅರೆ ಹೊಟ್ಟೆ ಕೂಲಿಕಾರರಾಗಿಯೋ ನಿರುದ್ಯೋಗಿಗಳಾಗಿಯೋ ಬಾಳಬೇಕಲ್ಲವೆ? ಈ ಪರಿಸ್ಥಿತಿ ನಿವಾರಣೆಗಾಗಿ ಬ್ಯಾಂಕು ರಾಷ್ಟ್ರೀಕರಣವಾದದ್ದಲ್ಲವೆ? ಆದರೂ ಇಂತಹ ಮೇಳಗಳು ಆರಂಭವಾಗುವ ಮೊದಲು ಆಸ್ತಿ ಇಲ್ಲದವರಿಗೆ ಸಾಲ ದೊರಕುತ್ತಿತ್ತೆ?

ಇನ್ನು, ಅಗತ್ಯವಿರುವವರನ್ನು ಸರ್ಕಾರವೇ ಗುರುತಿಸಿ ಅದರ ಆಧಾರದಿಂದ ಸಾಲ ವಿತರಣೆ ಮಾಡುವುದಾದರೆ ಈವರೆಗೆ ಸರ್ಕಾರವೇ ಗುರುತಿಸಿ ಕೊಟ್ಟಿರುವ ಸಾಲ ಮತ್ತು ಪರಿಹಾರ ಧನವು ಅರ್ಹರಿಗೆ ಮಾತ್ರ ಸಂದಾಯವಾಗಿದೆ ಎಂತ ಸರ್ಕಾರವಾಗಲಿ, ಟೀಕಾಕಾರರಾಗಲಿ ಆತ್ಮ ಸಾಕ್ಷಿಯಾಗಿ ಹೇಳಬಲ್ಲರೆ? ಅಲ್ಲದೆ ನಿಜವಾಗಿ ಅರ್ಹತೆ ಉಳ್ಳವರು ಸರ್ಕಾರದಿಂದ ಅರ್ಹತಾಪತ್ರ ಪಡೆಯಲು ಸರ್ಕಾರದ ಅಥವಾ ಖಾಸಗಿ ಮಧ್ಯವರ್ತಿಗಳಿಲ್ಲದೆ ಸಾಧ್ಯವೆ?

ರಾಜ್ಯ ಸರ್ಕಾರದ ಅಸಹಕಾರ, ಬಹಿಷ್ಕಾರಗಳಿಲ್ಲದೆ ರಾಜ್ಯ ಮತ್ತು ಕೇಂದ್ರ ಸರ್ಕಾರಗಳೆರಡೂ ಕೂಡಿ ಸಹಕರಿಸಿ ಕೆಲಸ ಮಾಡಿದರೆ ಈ ಸಾಲ ಮೇಳವು ಇನ್ನೂ ಹೆಚ್ಚು ಪ್ರಯೋಜನಕಾರಿಯಾಗುವುದಲ್ಲದೆ, ಸಾಲ ಪಡೆಯುವ ಅನರ್ಹರ ಸಂಖ್ಯೆಯೂ ಕಮ್ಮಿಯಾಗಿ, ಹೆಚ್ಚು ಹೆಚ್ಚು ಅಗತ್ಯವಿರುವವರಿಗೆ ಸಾಲ ದೊರೆತು ಬಡವರ್ಗಗಳ ಜೀವನ ಮಟ್ಟ ಸುಧಾರಿಸುವ ಮೂಲಕ ರಾಷ್ಟ್ರದ ಪ್ರಗತಿಗೆ ಸಹಾಯವಾಗುತ್ತದೆಂಬುದರಲ್ಲಿ ಅನುಮಾನವಿಲ್ಲ.

'ಸಾಲ ಮೇಳವು ಜನತೆಯನ್ನು ಸಾಲಗಾರರನ್ನಾಗಿ ಮಾಡುತ್ತದೆ' ಎಂದು ವಾದಿಸುವವರು, ಹಸಿದವನಿಗೆ ಊಟದ ಸಾಧ್ಯತೆಯನ್ನು ಕಡೆಗಣಿಸಿ, ಹೊಟ್ಟೆ ತುಂಬಿದವನಿಗೆ ಮೃಷ್ಟಾನ್ನ ಭೋಜನ ಮಾಡಿಸುವ 'ನ್ಯಾಯವಂತ'ರಾಗುತ್ತಾರೆ ಅಷ್ಟೇ. ಅಂತೆಯೇ 'ಸಾಲ ಮೇಳದಿಂದ ಬ್ಯಾಂಕುಗಳು ದಿವಾಳಿಯಾಗುತ್ತವೆ' ಎಂಬ ಬೊಬ್ಬೆ ಕೂಡ, ದೀನ-ದಲಿತರು ಉತ್ತಮ ಸ್ಥಿತಿಗೆ ಬರುವುದನ್ನು ಕನಸಿನಲ್ಲಿ ಕೂಡ ಸಹಿಸಲಾಗದ 'ಬುದ್ಧಿವಂತ'ರ ವಾದವಾಗಿದೆ.

—ಕೆ. ಗಣೇಶ ಪಟವರ್ಧನ್,
ಕೊಪ್ಪ

## ದಲಿತರ ದೀಪಾವಳಿ ಈ ಥರವೆ?

(2ನೇ ಪುಟದಿಂದ)

ದ. ಕ. ಜಿಲ್ಲೆಯಲ್ಲಿ ಈ ಕೊರಗ ವೇಷ ಹಾಕುವುದನ್ನು ಕೆಲವು ವರ್ಷಗಳ ಹಿಂದೆ ಈ ಜನಾಂಗದ ವಿದ್ಯಾವಂತ ಜನರು ಪ್ರತಿಭಟಿಸಿದ ನಂತರ ನಿಷೇಧಿಸಲಾಗಿದೆ. ಅಷ್ಟೇ ಅಲ್ಲ, ಅಲ್ಲಿ ಯಾವುದೇ ಜಾತಿಯ ವೇಷ ಹಾಕುವುದಕ್ಕೂ ನಿರ್ಬಂಧವಿದೆ. ಈ ಮಲೆನಾಡಿಗೆ ಈ ನಿಷೇಧವನ್ನು ಇನ್ನಾದರೂ ತರುವುದು ಒಳ್ಳೆಯದು. ಈ ಬಗ್ಗೆ ದಲಿತ ಸಂಘದವರು ದಲಿತ ಜನರ ಜಾಗೃತಿಯನ್ನು ಮಾಡಬೇಕಾದ್ದು ಅತಿ ಮುಖ್ಯ. ಸರ್ಕಾರವೂ ಇತ್ತ ಗಮನ ಹರಿಸಿ ಈ ಜಾತೀಯ ವೇಷಗಳಿಗೆ ನಿಷೇಧ ಹೇರುವುದು ಒಳ್ಳೆಯದು.

ಮುಂದಿನ ದೀಪಾವಳಿಯಲ್ಲಾದರೂ ಈ ರೀತಿಯ ದಲಿತರ ದೀಪಾವಳಿ ಆಚರಣೆ ನೋಡಲು ಸಿಗದಿರಲಿ ಎಂದು ಆಶಿಸೋಣ.

## ಸಾಲಮೇಳದ ಪ್ರಯೋಜನ ಎಲ್ಲರಿಗೂ ಸಿಗಲಿ

ಪ್ರಿಯ ಸಂಪಾದಕರೆ,

ತಮ್ಮ ಪತ್ರಿಕೆಯಲ್ಲಿ ಸಾಲಮೇಳದ ಕುರಿತು ಬಂದ ಲೇಖನ, ವರದಿ ಓದಿ ಈ ಪತ್ರ ಬರೆಯಲು ಮನಸ್ಸಾಯಿತು.

ನಾನು ಈ ಹಿಂದೆ ಜನಾರ್ದನ ಪೂಜಾರಿಯವರಿಗೆ ಸಾಲಕ್ಕಾಗಿ ಅರ್ಜಿ ಕೊಟ್ಟಿದ್ದೆ. ನಂತರ ಸ್ಟೇಟ್ ಬ್ಯಾಂಕಿನಿಂದ ಬಂದ ಕಾರ್ಡಿನ ಪ್ರಕಾರ ಮ್ಯಾನೇಜರ್‌ರನ್ನು ಭೇಟಿಯಾಗಿ ಫಾರ್ಮನ್ನು ತುಂಬಿ ಭಾವ ಚಿತ್ರ ಮತ್ತು ಉಳಿದ ವಾಣಿಜ್ಯ ಬ್ಯಾಂಕುಗಳ ಕ್ಲಿಯರೆನ್ಸ್ ಸರ್ಟಿಫಿಕೇಟ್‌ನ್ನು ಬ್ಯಾಂಕಿಗೆ ಹಾಜರು ಪಡಿಸಿದಾಗ ಪೂಜಾರಿಯವರು ಬರುವಾಗ ತಿಳಿಸುತ್ತೇನೆ ಎಂದು ತಿಳಿಸಿದರು

ಪುನಃ 26ನೇ ದಿನಾಂಕದಂದು ಈ ಬಗ್ಗೆ ವಿಚಾರಿಸಲು ಹೋದಾಗ, ನಿಮ್ಮ ಗ್ರಾಮ (ಸೋಮಲಾಪುರ)ದವರೆಲ್ಲರ ಅರ್ಜಿಗಳನ್ನು ಕರ್ನಾಟಕ ಬ್ಯಾಂಕಿಗೆ ಕಳುಹಿಸಲಾಗಿದೆ ಎಂದು ತಿಳಿಸಿದರು. ಕರ್ನಾಟಕ ಬ್ಯಾಂಕಿನಲ್ಲಿ ವಿಚಾರಿಸಿದರೆ, "ಬಂದ ಅರ್ಜಿಗಳನ್ನೆಲ್ಲ ವಾಪಸ್ಸು ಕಳಿಸಿದ್ದೇವೆ" ಎಂಬ ಉತ್ತರ ಬಂತು. ಅನಂತರ ತಿಳಿಯಿತು—ಸೋಮಲಾಪುರ ಗ್ರಾಮದವರೆಲ್ಲರಿಗೂ ಇದೇ ಅನುಭವವಾಯಿತೆಂದು.

ಸೋಮಲಾಪುರ ಗ್ರಾಮದವರಾರಿಗೂ ಸಾಲ ಮೇಳದ ಪ್ರಯೋಜನ ಲಭಿಸಲಿಲ್ಲ. ಕಾರಣ ಏನೆಂದು ತಿಳಿದು ಬಂದಿಲ್ಲ. ಹೀಗೆ ಸಾಲ ಮೇಳದ ಅನುಕೂಲಗಳು ಸುಸೂತ್ರವಾಗಿ ಜನರಿಗೆ ತಲುಪುತ್ತಿಲ್ಲವೆಂದು ತಿಳಿದು ವಿಷಾದವಾಯಿತು. ಸಂಬಂಧಪಟ್ಟವರು ಇನ್ನಾದರೂ ಇತ್ತ ಗಮನ ನೀಡಿಯಾರೆ?

—ಕುಮಾರ್,
ನಿಲಗುಳಿ, ಸೋಮಲಾಪುರ

## ರೂಪ್‌ಕನ್ವರ್ ದಹನ ಖಂಡನೀಯ

ಪ್ರಿಯರೆ,

ಕಳೆದ ವಾರದ ತಮ್ಮ ಪತ್ರಿಕೆಯಲ್ಲಿ ರೂಪ್ ಕನ್ವರ್‌ಳನ್ನು ಬಲಾತ್ಕಾರದಿಂದ ದಹನ ಮಾಡಿದ ವಿಷಯವನ್ನು ಸಂಪೂರ್ಣ ಮನದಟ್ಟಾಗುವಂತೆ ವಿಶ್ಲೇಷಿಸಿದ್ದೀರಿ. ಅಭಿನಂದನೆಗಳು

ಈ ರೂಪ್ ಕನ್ವರ್ ಸತಿಯಾದ ಸ್ಥಳವನ್ನು ವೀಕ್ಷಿಸಲು ಶಾಸಕರು, ಮಂತ್ರಿಗಳು, ಮೊದಲಾದ, ಅದರಲ್ಲಿ ಲಾಭ ಪಡೆಯುವ ರಾಜಕಾರಣಿಗಳು ತೆರಳಿದ್ದರೆಂದೂ, 20 ಲಕ್ಷ ಜನ ಸಂದಣಿಯೇ ನೆರದಿತ್ತೆಂದೂ ಪತ್ರಿಕೆಗಳಲ್ಲಿ ವರದಿಯಾಗಿದೆ. ಆ ಸ್ಥಳದಲ್ಲಿ ದೇವಸ್ಥಾನ ಮಾಡಿಸಲು 20 ಲಕ್ಷ ರೂ. ದೇಣಿಗೆ ಕೂಡ ವಸೂಲಾಗಿದ್ದು,ರಾಜಸ್ಥಾನಿ ಯುವಕರು ಆ ಸ್ಥಳವನ್ನು ಪಹರೆ ಕಾಯುತ್ತಿರುವುದೂ, ರೂಪ್‌ಕನ್ವರ್ ಸತಿಯಾದುದನ್ನು ಹಾಗೂ ಇಡೀ ಸತಿ ಪದ್ಧತಿಯನ್ನು ಕೆಲ ಮಠಾಧಿಪತಿಗಳು ಸಮರ್ಥಿಸುತ್ತಿರುವುದೂ ಬಹಳ ಶೋಚನೀಯ.

ರೂಪ್ ಕನ್ವರ್ ಸತಿಯಾಗುವಾಗ ದೇವತೆಗಳು ಅವಳಿಗೆ ಆಶೀರ್ವದಿಸುತ್ತಿರುವಂತೆ ಚಿತ್ರಿಸಿರುವ ಬಣ್ಣದ ಚಿತ್ರಗಳ ಫೋಟೋ ಕಾರ್ಡ್‌ಗಳು ಒಂದೊಂದು ಕಾರ್ಡಿಗೂ 7 ರಿಂದ 10 ರೂಪಾಯಿವರೆಗೂ ಮಾರಾಟವಾಗಿದ್ದು, ಈಗಾಗಲೇ ಇವುಗಳ 5 ಲಕ್ಷ ಪ್ರತಿಗಳು ಬಿಸಿ ದೋಸೆಯಂತೆ ಮಾರಾಟವಾಗಿವೆಯಂತೆ. ಅದೇ ರೀತಿ 'ಸತಿ' 'ಮತ' ಬಗ್ಗೆ ದುಃಖದ ಕ್ಯಾಸೆಟ್ ಮಾಡಿ ಎಷ್ಟೋ ಮಾರಾಟ ಮಾಡಿದ್ದಾರಂತೆ. "ಮಹಾ ಸತಿ ರೂಪ ಕನ್ವರ್" ಎಂಬ ಹೆಸರಿನ ರೂಪ್ ಕನ್ವರ್‌ಳ 'ಜೀವನ ಚರಿತ್ರೆ'ಯ ಪುಸ್ತಿಕೆಯ 2 ಲಕ್ಷ ಪ್ರತಿಗಳು ಖರ್ಚಾಗಿವೆಯಂತೆ. ಕೆಲವು ಕೈಗಾರಿಕಾ ಸಂಸ್ಥೆಗಳು ಹಣದ ವ್ಯವಸ್ಥೆ ಮಾಡಲು ಮುಂದೆ ಬಂದಿವೆ.

ಜನರನ್ನು ಅಜ್ಞಾನ, ಅಂಧಕಾರ, ಮೂಢ ನಂಬಿಕೆಗಳಿಂದ ದೂರವಿರಿಸುವ ಪ್ರಯತ್ನ ಮಾಡುವ ಬದಲು ಇಂತಹ ಅಮಾನವೀಯ ಪದ್ಧತಿಯನ್ನು ಪ್ರೋತ್ಸಾಹಿಸುವುದು ವಿಷಾದನೀಯ. ಮನುಷ್ಯ ವೈಜ್ಞಾನಿಕವಾಗಿ ಮುಂದುವರಿಯುತ್ತ ನಾಗರಿಕನಾಗುತ್ತಾ ಹೊರಟಿರುವ ಇಂದಿನ ದಿನಗಳಲ್ಲಿ ಇಂತಹ ನಂಬಿಕೆಗಳ ಕುರಿತು ಪ್ರಚಾರ ಮತ್ತು ಸಮರ್ಥನೆ ಬಹಳ ಖಂಡನೀಯ.

—ಅಬ್ದುಲ್ ಗಫಾರ್,
ಕೊಪ್ಪ

## ಬಡ ಜನರು, ಸಾಲ ಮೇಳ ಮತ್ತು ಪೂಜಾರಿ

(ಕಳೆದ ವಾರ 2 ದಿನ ಜಿಲ್ಲಾದ್ಯಂತ ನಡೆದ ಸಾಲ ಮೇಳದ ಬಗ್ಗೆ 'ಮಲೆನಾಡು ಸಂಗತಿ' ವಾರ ಪತ್ರಿಕೆಯಲ್ಲಿ ಬಂದ ವರದಿಯ ಪ್ರಮುಖ ಭಾಗವನ್ನು ಇಲ್ಲಿ ಪ್ರಕಟಿಸಿದೆ. ಸಾಲ ಮೇಳ ಕಾರ್ಯಕ್ರಮದ ಗುಣ-ದೋಷಗಳೆರಡನ್ನೂ ಹೆಚ್ಚು ವಸ್ತುನಿಷ್ಠವಾಗಿ ಚರ್ಚಿಸುವ ಒಂದು ಪ್ರಯತ್ನ ಈ ವರದಿಯಲ್ಲಿದೆ. —ಸಂ)

ಬಡಜನರೂ ಸಹ ಬ್ಯಾಂಕಿನ ಮೆಟ್ಟಿಲನ್ನು ಮೈಚಳಿ ಬಿಟ್ಟು ಹತ್ತಲು ಅವಕಾಶ ಮಾಡಿದ ಪೂಜಾರಿಯವರ ಮಾತುಗಳಲ್ಲಿ ಬಡ ಜನತೆಯ ಮೇಲಿನ ಕಾಳಜಿ ಎದ್ದು ಕಾಣುತ್ತಿತ್ತು. ಈ ಕಾಳಜಿಯಿಂದಲೇ ಪೂಜಾರಿಯವರು ತಮಗೆ ದಕ್ಕಿರುವ ಖಜಾನೆ ಪ್ರಭಾವವನ್ನು ಪಕ್ಷದ ತಳವೂರಿಕೆಗೆ ಬಳಸಿಕೊಳ್ಳುತ್ತಿದ್ದಾರೆ ಎನ್ನುವ ಅನುಮಾನ ಗೌಣವಾಗುತ್ತದೆ.

"ಕೋಟಿಗಟ್ಟಲೆ ಹಣವನ್ನು ಈ ಬ್ಯಾಂಕಿನವರು ಶ್ರೀಮಂತರಿಗೆ ಕರೆದು ಕೊಡುವಾಗ ಈ ದೇಶದ ಬಡವನಿಗೆ ಏಕೆ 3-4 ಸಾವಿರ ರೂ. ಹಣವನ್ನು ಕೊಡಬಾರದು?" ಎಂದು ಕೇಳುವ ಪೂಜಾರಿಯವರ ಮಾತುಗಳಲ್ಲಿ ಬ್ಯಾಂಕಿನವರು ಕಷ್ಟಪಟ್ಟು ಕೆಲಸ ಮಾಡಿದಲ್ಲಿ ಅದರ ಮರುಪಾವತಿ ಸುಲಭ ಸಾಧ್ಯವೆಂಬ ಅಭಿಪ್ರಾಯವಿತ್ತು.

....ಕಾರ್ಯಕ್ರಮದ ಕೊನೆಯಲ್ಲಿ ಸಾಲವನ್ನು ಮರು ಪಾವತಿ ಮಾಡಿದವರನ್ನು ಸನ್ಮಾನಿಸಲಾಯಿತು. ಯಾವುದೇ ಸನ್ಮಾನ ಅಪರೂಪದ ವ್ಯಕ್ತಿಗಳಿಗೆ ಆಗಬೇಕು. ತಾನೆ? ಅಂದಾಗ ಇಲ್ಲಿ ಸಾಲವನ್ನು ಮರುಪಾವತಿ ಮಾಡುತ್ತಿರುವವರು ತುಂಬಾ ಅಪರೂಪವೆಂದ ಹಾಗಾಯಿತಲ್ಲವೆ? ಹೀಗಿರುವಾಗ ಪಡೆದ ಸಾಲವನ್ನು ಬಡ ಜನರು ಸೂಕ್ತವಾಗಿ ದುಡಿಸಿಕೊಳ್ಳಲು ಸಾಧ್ಯವಾಗಿಲ್ಲವೆಂದೇ ಅರ್ಥ ಅಥವಾ ಆ ಹಣವನ್ನು ಆತ ತನ್ನ ದೈನಂದಿನ ತೊಂದರೆಗಳಿಗಾಗಿ ಬಳಸಿಕೊಂಡಿದ್ದಾನೆಂದು ಅರ್ಥ.

ಸಾಲ ಪಡೆದವರಲ್ಲಿ ಬಹುತೇಕ ಜನರು ಈ ಸಾಲಿನಲ್ಲಿ ಬರುತ್ತಾರೆ. ಅಲ್ಲದೆ ಪೂಜಾರಿ ಸಾಲವೆಂದರೆ ಮರುಪಾವತಿ ಮಾಡದಿದ್ದರೂ ನಡೆಯುತ್ತದೆ ಎನ್ನುವ ಅಭಿಪ್ರಾಯ ಸಾರ್ವತ್ರಿಕವಾಗಿ ಕೇಳಿ ಬರುತ್ತಿದೆ. ಇದರ ಪರಿಣಾಮವಾಗಿ ಸಾಲದ ಅರ್ಜಿಗಳು ಮೂಟೆಗಟ್ಟಲೆ ತಯಾರಾಗುತ್ತಿವೆ. ಪೂಜಾರಿಯವರ ಬೆದರಿಕೆಯಿಂದಾಗಿ ಸಾಲ ಮಂಜೂರಾಗುತ್ತವೆ, ಮರು ಪಾವತಿಯಾಗುವುದಿಲ್ಲ.

ಈ ಬಗ್ಗೆ ಪೂಜಾರಿಯವರು ಬ್ಯಾಂಕ್

(4ನೇ ಪುಟಕ್ಕೆ)

## ಬಡ ಜನರು, ಸಾಲ ಮೇಳ ಮತ್ತು ಪೂಜಾರಿ

(3ನೇ ಪುಟದಿಂದ)
ಅಧಿಕಾರಿಗಳು ಕಷ್ಟ ಪಟ್ಟು ವಸೂಲಿ ಮಾಡಬೇಕೆನ್ನುವುದು ಸತ್ಯವಾದರೂ ಸದ್ಯದ ಸ್ಥಿತಿಯಲ್ಲಿ ಈ ಸಾಲ ಮೇಳ ಜನತಾ ಪಕ್ಷವನ್ನು ಬಗ್ಗು ಬಡಿಯಲು ಹೂಡಿರುವ ಸಾಧನೆಯಾಗಿಯೇ ಕಾಣುತ್ತದೆ. ಆದರೆ ಇಂತಹ ಮೇಳವನ್ನೇ ಬೇಡ ಎಂದು ಹೇಳುವ ರಾಮಕೃಷ್ಣ ಹೆಗಡೆಯವರ ಬಡ ಜನ ವಿರೋಧಿ ನಿಲುವಿನಂತಹ ಕಾರ್ಯಕ್ರಮವಂತೂ ಈ ಸಾಲ ಮೇಳ ಅಲ್ಲ.

ಮೊನ್ನೆ ನಡೆದ ಈ ಸಾಲ ಮೇಳ ಭಾಗಶಃ ಬಡವರಿಗೆ ಸಾಲ ನೀಡುವ ಉದ್ದೇಶದ್ದಾಗಿದ್ದರೆ ಭಾಗಶಃ ಕಾಂಗ್ರೆಸ್ ಪಕ್ಷದ ಚುನಾವಣಾ ಪ್ರಚಾರ ಸಭೆಯೂ ಆದಂತಿತ್ತು.

—ವರದಿಗಾರ

* * *

[ಇಲ್ಲಿ 2 ಸತ್ಯ ಸಂಗತಿಗಳನ್ನು ಓದುಗರ ಗಮನಕ್ಕೆ ತರಬಹುದು.

1. ಸಾಲಕ್ಕಾಗಿ ಸಲ್ಲಿಸಿದ ಮೂಟೆಗಟ್ಟಲೆ ಅರ್ಜಿಗಳಲ್ಲಿ ಎಲ್ಲವಕ್ಕೂ ಸಾಲ ಮಂಜೂರಾಗುವುದಿಲ್ಲ. ಬೇರಾವುದೇ ಬ್ಯಾಂಕಿನಲ್ಲಿ ಸಾಲ ಸುಸ್ತಿಯಾಗಿಲ್ಲದವರಿಗೆ ಮಾತ್ರ, ಇನ್ನಿತರ ನಿಯಮಗಳಿಗೂ ಒಳಪಟ್ಟು ಸಾಲ ದೊರೆಯುತ್ತದೆ.

2. ಸಾಲ ಮೇಳದ ದಿನ ಪ್ರಕಟಿಸುವ ಅಂಕಿ–ಅಂಶ ಆ ದಿನವೇ ನೀಡಿದ ಸಾಲದ ಲೆಕ್ಕವಲ್ಲ. ಆಯಾ ವರ್ಷದ ಜನವರಿಯಿಂದ ಆ ತಾರೀಖಿನವರೆಗೆ ಕೇಂದ್ರ ಸರ್ಕಾರದ ಡಿಆರ್‌ಐ, ಐಆರ್‌ಡಿಪಿ, ಸ್ವ – ಉದ್ಯೋಗ ಇತ್ಯಾದಿ ಇತ್ಯಾದಿ ಎಲ್ಲಾ ವಿಧದ ಸೇವು ಯೋಜನೆಗಳ ಅಡಿಯಲ್ಲಿ ಮಂಜೂರು ಮಾಡಿದ ಒಟ್ಟು ಸಾಲಗಳ ಲೆಕ್ಕ ಅದು. ಅದರಲ್ಲಿ ಕೂಡ ಬೇರೆ ಬ್ಯಾಂಕ್‌ಗಳಿಂದ 'ನೋ ಡ್ಯೂ ಸರ್ಟಿಫಿಕೇಟ್' ತರಲಾರದವರಿಗೆ ಸಾಲ ಸಿಗುವುದಿಲ್ಲ.

ಅಂದರೆ, ಸಾಲದ ಅವಶ್ಯಕತೆ ಇರುವ ಎಲ್ಲ ಅರ್ಹರೂ ಸಾಲ ಪಡೆಯಬಹುದು ಹೊರತು ಬೇಕಾ ಬಿಟ್ಟಿಯಾಗಿ, ಅರ್ಜಿ ಕೊಟ್ಟವರಿಗೆಲ್ಲ, ಯಾರಿಗೆ ಬೇಕಾದರೂ ಸಾಲ ಸಿಗುತ್ತೆಂಬ ಪ್ರಚಾರದಲ್ಲಿ ಹುರುಳಿಲ್ಲ. ಎಲ್ಲರಿಗೂ ಐದೈದು ಸಾವಿರ ಸಿಗುತ್ತೆಂಬುದೂ ಸತ್ಯವಲ್ಲ. ಗರಿಷ್ಠ ಮಿತಿ 5 ಸಾವಿರ ಅಷ್ಟೆ. ಅವರವರ ಉದ್ದೇಶದ ಅಗತ್ಯವನ್ನು ಲೆಕ್ಕ ಹಾಕಿ, 5 ಸಾವಿರಕ್ಕೆ ಮೀರದಂತೆ (ಸಾಮಾನ್ಯವಾಗಿ 1ರಿಂದ 3 ಸಾವಿರದೊಳಗೆ) ಸಾಲ ನೀಡಲಾಗುತ್ತಿದೆ.

—ಸಂಪಾದಕ.]

## ಚಿಕ್ಕಮಗಳೂರಲ್ಲಿ ನ. 18ಕ್ಕೆ ಕವಿ ಗೋಷ್ಠಿ

ಚಿಕ್ಕಮಗಳೂರು ಜಿಲ್ಲಾ ಡಾ|| ರಾಜ್‌ಕುಮಾರ್ ಅಭಿಮಾನಿಗಳ ಸಂಘವು ಕನ್ನಡ ರಾಜ್ಯೋತ್ಸವದ ಅಂಗವಾಗಿ ನವೆಂಬರ್ 18ರಂದು ಸಂಜೆ 6 ಗಂಟೆಗೆ ನಗರದ ನಗರ ಸಭಾ ಭವನದಲ್ಲಿ ಜಿಲ್ಲೆಯ ಯುವ–ಉದಯೋನ್ಮುಖ ಕವಿಗಳಿಗಾಗಿ ಜಿಲ್ಲಾ ಮಟ್ಟದ ಕವಿಗೋಷ್ಠಿಯನ್ನು ಏರ್ಪಡಿಸಿದೆ. ಗೋಷ್ಠಿಯಲ್ಲಿ ಪ್ರತಿಯೊಬ್ಬರೂ ಎರಡು ಸ್ವರಚಿತ ಕವನಗಳನ್ನು ವಾಚಿಸಲು ಅವಕಾಶ ಇರುತ್ತದೆ.

ಭಾಗವಹಿಸುವ ಕವಿಗಳು ತಮ್ಮ ಎರಡು ಸ್ವರಚಿತ ಕವನಗಳೊಂದಿಗೆ ನವೆಂಬರ್ 18 ರಂದು ಸಂಜೆ ಈ ಕಾರ್ಯಕ್ರಮ ನಡೆಯುವುದಕ್ಕೆ ಕನಿಷ್ಠ 15 ನಿಮಿಷ ಮುಂಚಿತವಾಗಿ ಸ್ಥಳದಲ್ಲಿ ಹಾಜರಿರಬೇಕೆಂದು ಸಂಘದ ಪ್ರಕಟಣೆ ತಿಳಿಸಿದೆ.

## ಯಕ್ಷಗಾನ ತಾಳಮದ್ದಲೆ

ಹರಿಹರಪುರ : ಇಲ್ಲಿನ ಮಲೆನಾಡು ಯಕ್ಷಗಾನ ಶಿಕ್ಷಣ ಕೇಂದ್ರದ ಕಲಾವಿದರಿಂದ ನ. 1ರಂದು 'ಕರ್ಣ ಮೋಕ್ಷ' ಎಂಬ ಯಕ್ಷಗಾನ ತಾಳಮದ್ದಲೆ ಕಾರ್ಯಕ್ರಮ ನಡೆಯಿತು.

ಕೇಂದ್ರದ ಆಶ್ರಯದಲ್ಲಿ ಆಚರಿಸಲಾದ ರಾಜ್ಯೋತ್ಸವದ ಅಂಗವಾಗಿ ಈ ಕಾರ್ಯಕ್ರಮ ನಡೆಯಿತು. ಇದಕ್ಕೆ ಮೊದಲು ಡಾ|| ಯು. ವಿ ಆರ್. ಭಟ್ಟರ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ ಕಿ|| ಶಾಲೇಜಿನ ಉಪನ್ಯಾಸಕ ರಾಮ ಪ್ರಸಾದ್ ಮತ್ತು ಹೊಸಕೊಪ್ಪ ಕರ್ನಾಟಕ ಬ್ಯಾಂಕ್ ಮ್ಯಾನೇಜರ್ ರಾಘವಾಚಾರ್ ಕರ್ನಾಟಕ ಇತಿಹಾಸ ಮತ್ತು ಆಡಳಿತದಲ್ಲಿ ಕನ್ನಡ–ವಿಷಯಗಳ ಬಗ್ಗೆ ಭಾಷಣ ಮಾಡಿದರು. ಎಚ್. ಎಸ್. ಮಂಜುನಾಥ್ ಮುಖ್ಯ ಅತಿಥಿಗಳಾಗಿದ್ದರು. ಡಾ|| ಎಚ್. ಜಿ.ಶೇಷಗಿರಿ ಸ್ವಾಗತಿಸಿ, ಭಾಸ್ಕರಾಚಾರ್ ವಂದಿಸಿದರು.

## ಉಳಿತಾಯ ಸಂಗ್ರಹ ಅಭಿಯಾನ

ಹಾಲ್ಮುತ್ತೂರು : ನವೆಂಬರ್ 2 ರಂದು ಇಲ್ಲಿನ ಚಿಕ್ಕಮಗಳೂರು–ಕೊಡಗು ಗ್ರಾಮೀಣ ಬ್ಯಾಂಕ್‌ನ 'ಉಳಿತಾಯ ಸಂಗ್ರಹ ಅಭಿಯಾನ'ವನ್ನು ಚಾವಲ್ಮನೆ ಮಂಡಲ ಪ್ರಧಾನ ಕೆ. ಕೃಷ್ಣಪ್ಪನವರ ಅಧ್ಯಕ್ಷತೆಯಲ್ಲಿ ಎಚ್. ಬಿ. ಕೃಷ್ಣಯ್ಯ ಗೌಡರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಮಂಡಲ ಸದಸ್ಯರಾದ ಯು. ಎಸ್. ಶಿವಪ್ಪ ಹಾಗೂ ಭಂಡಿಗಡಿ ಯುವಕ ಸಂಘದ ಅಧ್ಯಕ್ಷ, ಲಿಂಗಪ್ಪ ಇವರುಗಳು ಅತಿಥಿಗಳಾಗಿದ್ದರು.

ಸಮಾರಂಭದಲ್ಲಿ ಎಚ್. ಎಸ್. ಜಯರಾಂ ಜೋಯಿಸ್, ಕೆ. ಎಸ್, ಹೂವಪ್ಪಗೌಡ, ಎಚ್. ಸಿ. ಸಿದ್ದಪ್ಪ, ಚಾವಲ್ಮನೆ ಸುರೇಶ್ ನಾಯಕ್ ಹಾಗೂ ವೆಂಕಟೇಶಯ್ಯ ಇವರುಗಳು ಮಾತನಾಡಿದರು.

ಬ್ಯಾಂಕಿನ ಮ್ಯಾನೇಜರ್ ಕೃಷ್ಣರಾಜ್ ಸ್ವಾಗತಿಸಿ, ವಸಂತಕುಮಾರ್ ವಂದಿಸಿದರು.

(ವರದಿ : ಚಾವಲ್ಮನೆ ಸುರೇಶ್ ನಾಯಕ್)

## ಬಸ್ ವೇಳಾಪಟ್ಟಿ ಪ್ರಕಟಿಸಲು ಆದೇಶ

ಚಿಕ್ಕಮಗಳೂರು : ಈ ಪ್ರದೇಶದ ಎಲ್ಲ ಪರ್ಮಿಟ್ ಪಡೆದ ಬಸ್ ಕಂಪೆನಿಗಳವರು ತಮ್ಮ ಬಸ್‌ಗಳು ಹೊರಡುವ ಹಾಗೂ ತಲುಪುವ ವೇಳೆಗಳನ್ನು ಆಯಾ ನಿಲ್ದಾಣಗಳಲ್ಲಿ ಯಾ ನಿಲ್ದಾಣಗಳಲ್ಲಿ ಕಡ್ಡಾಯವಾಗಿ ಪ್ರಕಟಿಸಬೇಕು ಎಂದು ಪ್ರಾದೇಶಿಕ ಸಾರಿಗೆ ಪ್ರಾಧಿಕಾರ ನೋಟೀಸು ನೀಡಿದೆ.

ವೇಳಾಪಟ್ಟಿಯನ್ನು ಪ್ರಕಟಿಸಬೇಕೆಂಬ ಸಾರಿಗೆ ವಾಹನ ಕಾಯ್ದೆಯ ಸೆಕ್ಷನ್ 48 (iii)ನ್ನು ಕೆಲವು ಕಂಪೆನಿಗಳು ವಿರೋಧಿಸಿದ್ದರ ಹಿನ್ನೆಲೆಯಲ್ಲಿ ಬಾಳೆಹೊನ್ನೂರಿನ ರಸ್ತೆ ಬಳಕೆದಾರರ ವೇದಿಕೆ ಪ್ರಾಧಿಕಾರಕ್ಕೆ ದೂರು ನೀಡಿತ್ತು. ಅದನ್ನನುಸರಿಸಿ ಈ ನೋಟೀಸು ನೀಡಲಾಗಿದೆ.

## ಅಕ್ರಮ ಸಾಗುವಳಿ ತೆರವು

(ವರದಿ : ತ. ವಿ. ವಿಷ್ಣುಮೂರ್ತಿ)

ಕಲ್ಲುಗುಡ್ಡೆ : ಈ ಗ್ರಾಮದ ದಟ್ಟವಾದ ಅರಣ್ಯ ಪ್ರದೇಶಗಳಲ್ಲಿ ಮೂಡಿಗೆರೆ ತಾ|| ನವರೆನ್ನಲಾದ ಕೆಲವರು ಅಕ್ರಮ ಸಾಗುವಳಿ ಮತ್ತು ವಸತಿಗಾಗಿ ನಿರ್ಮಿಸಿದ್ದ ಬೇಲಿಯನ್ನು ಸ್ಥಳೀಯ ರೈತರ ಮತ್ತು ದಲಿತರ ಪ್ರತಿಭಟನೆಯ ನೆರವಿನಿಂದ ಶೃಂಗೇರಿ ವಲಯ ಅರಣ್ಯಾಧಿಕಾರಿಗಳು ತೆರವು ಮಾಡಿಸಿದ್ದಾರೆ.

ಈ ಅಕ್ರಮ ಸಾಗುವಳಿ ಯತ್ನಕ್ಕೆ ಗ್ರಾಮದಲ್ಲೇ ಕೆಲವರು ತಮ್ಮ ಲಾಭಕ್ಕಾಗಿ ಸಹಕಾರ ನೀಡಿದ್ದನ್ನು ಗ್ರಾಮಸ್ಥರು ಖಂಡಿಸಿದ್ದಾರೆ.

ಈ ಗ್ರಾಮದ ಖಾಯಂ ವಾಸಿಗಳಾದ ದಲಿತ ಕುಟುಂಬಗಳವರು ಹತ್ತಾರು ವರ್ಷಗಳಿಂದ ಕೃಷಿ ಭೂಮಿಗಾಗಿ ಅರ್ಜಿಸಲ್ಲಿಸಿದ್ದರೂ ಮಂಜೂರಾತಿ ಆಗದಿದ್ದು, ಖಾಲಿ ಇರುವ ಪ್ರದೇಶಗಳಲ್ಲೆಲ್ಲ ಉಳ್ಳವರ ಒತ್ತುವರಿ ಸಾಗುವಳಿಯಾದರೆ ಭೂರಹಿತರ ಪಾಡೇನು ಎಂದು ಕೇಳುವಂತಾಗಿದೆ.

## ವೈಭವದ 'ಮಿಲಾದುನ್ನಬಿ' ಆಚರಣೆ

ಜಯಪುರ : ಇಲ್ಲಿನ ಬದ್ರಿಯಾ ಜುಮಾ ಮಸೀದಿಯ ಆಶ್ರಯದಲ್ಲಿ ಪ್ರವಾದಿ ಮಹಮುಹಮ್ಮದ್ ಪೈಗಂಬರರ ಜನ್ಮದಿನವನ್ನು ಅದ್ದೂರಿಯಿಂದ ಆಚರಿಸಲಾಯ್ತು. 1ರಿಂದ 3ನೇ ತಾರೀಖಿನವರೆಗೆ ಮತ ಪಂಡಿತರಿಂದ ಮತ ಪ್ರಸಂಗವನ್ನು ಏರ್ಪಡಿಸಲಾಗಿತ್ತು. 4–11–87 ರಂದು ನಡೆದ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಅಬ್ದುಲ್ ರಜಾಕ್ ಮೌಲವಿ, ಖತೀಬ್ ಅವರು ವಹಿಸಿದ್ದರು. ಮಕ್ಕಳ ಕಾರ್ಯಕ್ರಮದಲ್ಲಿ ಬಹುಮಾನ ವಿಜೇತ ಮಕ್ಕಳಿಗೆ ಕೆ. ಮೊಹಮ್ಮದ್ ಆಲಿ ಬಹುಮಾನ ವಿತರಣೆ ಮಾಡಿದರು. ಇದಕ್ಕೆ ಮೊದಲು ಬಿ. ಪಿ. ಮೊಹಮ್ಮದ್ ಧ್ವಜಾರೋಹಣ ಮಾಡಿದರು. ಕಾರ್ಯಕ್ರಮದ ನಂತರ ಮಕ್ಕಾದ ಕಾಬಾದ 'ಟ್ಯಾಬ್ಲೋ' ದೊಂದಿಗೆ ಮೆರವಣಿಗೆ ನಡೆಸಲಾಯಿತು. ಮಧ್ಯಾಹ್ನ ಮೌಲೂದ್ ಪಾರಾಯಣ ಮತ್ತು ಸಾಮೂಹಿಕ ಭೋಜನ ಏರ್ಪಡಿಸಲಾಗಿತ್ತು. (ವರದಿ : ಕೃಷ್ಣ ಭಂಡಾರಿ)



ಶಿವಮೊಗ್ಗ ಅಡಿಕೆ ಧಾರಣೆ
ತಾ|| 6.11.1987

| | |
|---|---|
| ಸರಕು : | 3510 – 4819 |
| ಬೆಟ್ಟೆ : | 2124 – 2560 |
| ಗೊರಬಲು : | 844 – 1150 |

ಮಂಗಳೂರು ಏಲಕ್ಕಿ ಧಾರಣೆ
ದಿನಾಂಕ 6–11–1987
ರೂ. 75 – 105
ಕಾಳು ಮೆಣಸು 5536

## ವಿದ್ಯಾರಣ್ಯಪುರ ಮಂಡಲ ಪಂಚಾಯಿತಿ

ಶೃಂಗೇರಿ ತಾಲ್ಲೂಕ್

ಸಂಖ್ಯೆ. ವಿ. ಮಂ. ಪಂ. 32.33/87-88 ತಾ|| 19 10.1987

### ಪ್ರ ಕ ಟ ಣೆ

ಶೃಂಗೇರಿ ತಾಲ್ಲೂಕ್ ಮಂಡಲ ಪಂಚಾಯ್ತಿ ಅಧಿಕಾರಕ್ಕೆ ಸೇರಿದ "ಕಸಾಯಿ ಖಾನೆ" ನಡೆಸುವ ಹಕ್ಕನ್ನು ದಿನಾಂಕ 1.12.1987ರಿಂದ 31.3.1988ರ ವರೆಗೆ ಬಹಿರಂಗವಾಗಿ ವಿದ್ಯಾರಣ್ಯಪುರ ಮಂಡಲ ಪಂಚಾಯ್ತಿ ಕಾರ್ಯಾಲಯದಲ್ಲಿ ತಾರೀಖು 11.11.1987ರ ಬುಧವಾರ ಬೆಳಗ್ಗೆ 11 ಗಂಟೆಗೆ ಹರಾಜು ಮಾಡಲಾಗುವುದು ಹಾಗೂ ಮೇಲ್ಕಂಡ ಪಂಚಾಯ್ತಿ ವ್ಯಾಪ್ತಿಯಲ್ಲಿ "ಹಸಿ ಮಾಂಸ ಮಾರಾಟ" ಹಕ್ಕನ್ನು 1.12.1987ರಿಂದ 31.3.1988ರವರೆಗೆ ಬಹಿರಂಗವಾಗಿ ಪಂಚಾಯ್ತಿ ಕಾರ್ಯಾಲಯದಲ್ಲಿ ದಿನಾಂಕ 11.11.1987ರ ಅಪರಾಹ್ನ 3–00 ಘಂಟೆಗೆ ಹರಾಜು ಮಾಡಲಾಗುವುದು. ಇಚ್ಛೆಯುಳ್ಳವರು ಹರಾಜಿನಲ್ಲಿ ಭಾಗವಹಿಸಬಹುದು. ಹೆಚ್ಚಿನ ವಿವರಗಳನ್ನು ಪಂಚಾಯ್ತಿ ಕಛೇರಿ ವೇಳೆಯಲ್ಲಿ ಪಡೆಯಬಹುದು.

ಎಲ್. ವಾಸುದೇವ್, ಕಾರ್ಯದರ್ಶಿ

ಎಚ್ ಜಿ. ಶಿವಪ್ಪ ಹೆಗ್ಡೆ, ಪ್ರಧಾನರು

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅಚ್ಚು : ದೀಪಿಕಾಗೆ ಅಚ್ಚು ಕೂಟ, ಕೊಪ್ಪ